| ಕ್ರಮ ಸಂಖ್ಯೆ | ಸರ್ಕಾರಿ ಆದೇಶ ಸಂಖ್ಯೆ ಹಾಗೂ ದಿನಾಂಕ | ಮಂಜೂರಾಗಿರುವ ಒಟ್ಟು ಸಾಮರ್ಥ್ಯ (ಮೆಗಾ ವ್ಯಾಟ್‌ಗಳಲ್ಲಿ) | ರದ್ದು ಪಡಿಸಿರುವ ಯೋಜನೆಯ ವಿವರಗಳು | ರದ್ದು ಪಡಿಸಿರುವ ಯೋಜನೆಯ ಸಾಮರ್ಥ್ಯ (ಮೆಗಾ ವ್ಯಾಟ್‌ಗಳಲ್ಲಿ) |
|---|---|---|---|---|
| 10 | ಸರ್ಕಾರಿ ಆದೇಶ ಸಂಖ್ಯೆ: ಇಎನ್ 292 ಎನ್‌ಸಿಇ 2005 ದಿನಾಂಕ: 14.10.2005 | 59.4 | ಆದೇಶ ಭಾಗದಲ್ಲಿನ ಶೆಡ್ಯೂಲ್‌ನ ಕ್ರಮ ಸಂಖ್ಯೆ 2ರಲ್ಲಿ ಮಡಿಕೇರಿ ಜಿಲ್ಲೆಯ ಹೆಬ್ಬಾಳಗುಡ್ಡ, ನಾಗರಹಳ್ಳಿ, ಸಿಂಗನಹಳ್ಳಿ ಮತ್ತು ಮಾದಾಪುರ ಗ್ರಾಮಗಳಲ್ಲಿ ಮಂಜೂರಾಗಿದ್ದ ಅಂಶಿಕ ಸಾಮರ್ಥ್ಯ | 50.4 |
| | | | **ಒಟ್ಟು ರದ್ದುಪಡಿಸಿರುವ ಸಾಮರ್ಥ್ಯ** | **215.6** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

P.R. 1165

SC - 50

## ಇಂಧನ ಸಚಿವಾಲಯ

**ವಿಷಯ** : 2012–13ನೇ ಸಾಲಿಗೆ ವಿಶೇಷ ಅಭಿವೃದ್ಧಿ ಯೋಜನೆಯಡಿ ನಿರಂತರಜ್ಯೋತಿ ಕಾಮಗಾರಿಗಳ ಸಲುವಾಗಿ ವಿಸಕಂಗಳಿಗೆ Equity ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 04 ಟಿಎಫ್‌ಪಿ 2012, ದಿನಾಂಕ : 27–04–2012.
2. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 22 ಪಿಎಸ್‌ಆರ್ 2012, ದಿನಾಂಕ : 27–04–2012.
3. ಯೋಜನಾ ಇಲಾಖೆಯ ಜಂಟಿ ಕಾರ್ಯದರ್ಶಿಗಳ ಅಟಿ ಸಂಖ್ಯೆ : ಪಿಡಿ 22 ಎಸ್‌ಡಿಪಿ 2012 (ಇಂಧನ) ದಿನಾಂಕ : 25–06–2012.

**ಪ್ರಸ್ತಾವನೆ :**

1. 2012–13ನೇ ಸಾಲಿನ ಆಯವ್ಯಯದಲ್ಲಿ ಗಡಿಭಾಗದ ತಾಲ್ಲೂಕುಗಳ ಅಭಿವೃದ್ಧಿಗಾಗಿ ವಿಶೇಷ ಅಭಿವೃದ್ಧಿ ಯೋಜನೆಯಡಿ ನಿರಂತರ ಜ್ಯೋತಿ ಕಾಮಗಾರಿಗಳಿಗೆ ರೂ. 150 ಕೋಟಿಗಳನ್ನು ಒದಗಿಸಿರುತ್ತದೆ.
2. ನಿರಂತರಜ್ಯೋತಿ ಯೋಜನಾ ಕಾಮಗಾರಿಗಳಿಗೆ ವಿಶೇಷ ಅಭಿವೃದ್ಧಿ ಯೋಜನೆಯಡಿ Equity ಹಣ ಬಿಡುಗಡೆ ಮಾಡಲು, ವಿದ್ಯುತ್ ಸರಬರಾಜು ಕಂಪನಿಗಳ ಕೋರಿಕೆಯ ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಪರಿಶೀಲಿಸಿದ್ದು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 30 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ : 16–07–2012**

1. ಸರ್ಕಾರವು 2012–13ನೇ ಸಾಲಿನಲ್ಲಿ ವಿಶೇಷ ಅಭಿವೃದ್ಧಿ ಯೋಜನೆಯಡಿ ನಿರಂತರ ಜ್ಯೋತಿ ಕಾಮಗಾರಿಗಳ ಸಲುವಾಗಿ ರೂ. 150 ಕೋಟಿಗಳನ್ನು (ನೂರೈವತ್ತು ಕೋಟಿ ರೂಪಾಯಿಗಳು ಮಾತ್ರ) ಈ ಕೆಳಕಂಡಂತೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಹಣ ಬಿಡುಗಡೆಗೊಳಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಕಂಪನಿಗಳ ಹೆಸರು | Equity ರೂಪದಲ್ಲಿ ಬಿಡುಗಡೆ ಮಾಡಿದ ಹಣ (ಕೋಟಿ ರೂ.ಗಳಲ್ಲಿ) |
|---|---|---|
| 1. | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 37.50 |
| 2. | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 30.00 |
| 3. | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 60.00 |
| 4. | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ | 22.50 |
| | **ಒಟ್ಟು ಮೊತ್ತ** | **150.00** |

2. ಸದರಿ ಮೊತ್ತವನ್ನು 4801–80–190–0–02–133 (Plan) Investment in ESCOMs for Niranthara Jyothi works Special Development Plan–ಲೆಕ್ಕಶೀರ್ಷಿಕೆಯಡಿ ಭರಿಸತಕ್ಕದ್ದು.
3. ವಿದ್ಯುತ್ ಸರಬರಾಜು ಕಂಪನಿಗಳು ಸರ್ಕಾರ ಉಪ ಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲು ರುಜುವನ್ನು Payee's receipt ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 471 Exp-1/2012, ದಿನಾಂಕ : 02–04–2012 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

P.R. 959

SC - 30

## ಇಂಧನ ಸಚಿವಾಲಯ

**ವಿಷಯ :** ರಾಜ್ಯದ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಹೈವೋಲ್ಟೇಜ್ ವಿತರಣಾ ವ್ಯವಸ್ಥೆ (HVDS-High Voltage Distribution System) ಯನ್ನು ಪ್ರಾಯೋಗಿಕವಾಗಿ ಅನುಷ್ಠಾನಗೊಳಿಸುವ ಬಗ್ಗೆ.

**ಪ್ರಸ್ತಾವನೆ :**

1. 2013–14ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಹೈವೋಲ್ಟೇಜ್ ವಿತರಣಾ ವ್ಯವಸ್ಥೆ (HVDS-High Voltage Distribution System) ಯನ್ನು ಪ್ರತಿ ವಿದ್ಯುತ್ ಸರಬರಾಜು ಕಂಪನಿಯ ಒಂದು ಉಪವಿಭಾಗದಲ್ಲಿ ಪ್ರಾಯೋಗಿಕವಾಗಿ ಅನುಷ್ಠಾನಗೊಳಿಸಲು ಘೋಷಿಸಲಾಗಿದೆ.
2. ರಾಜ್ಯದಲ್ಲಿ ಪ್ರಸರಣಾ ಮತ್ತು ವಿತರಣಾ ವ್ಯವಸ್ಥೆಯಲ್ಲಿ ನ್ಯೂನತೆಗಳು :
   - ಪ್ರಸರಣಾ ಮತ್ತು ವಿತರಣಾ ನಷ್ಟ ಸುಮಾರು ಶೇ. 20 ರಷ್ಟಿದೆ.
   - ವಿತರಣಾ ವ್ಯವಸ್ಥೆಯಲ್ಲಿ ವಿದ್ಯುತ್ ಕಳ್ಳತನದಿಂದ ಸರಬರಾಜು ಕಂಪನಿಗಳ ಆದಾಯದಲ್ಲಿ ನಷ್ಟವಾಗುತ್ತಿದೆ.
   - ಅಕ್ರಮ ವಿದ್ಯುತ್ ಸಂಪರ್ಕಗಳಿಂದ ವಿದ್ಯುತ್ ಜಾಲದ ಮೇಲೆ ಅತ್ಯಧಿಕ ಹೊರೆ ಬೀಳುತ್ತಿದೆ.
   - ಅಲ್ಲದೆ, ಸಕ್ರಮ ಗ್ರಾಹಕರಿಗೆ ಗುಣಮಟ್ಟದ ವಿದ್ಯುತ್ ಒದಗಿಸುವುದು ಕಷ್ಟವಾಗುತ್ತಿದೆ.
   - ಗ್ರಾಹಕರಿಗೆ ನೀಡುತ್ತಿರುವ ವಿದ್ಯುತ್ ಪ್ರಮಾಣ ಮತ್ತು ಅವಧಿಯಲ್ಲಿ ವ್ಯತ್ಯಯವಾಗುತ್ತಿದೆ.

   ಈ ಎಲ್ಲಾ ಕೊರತೆಗಳನ್ನು ನೀಗಿಸಲು ಮತ್ತು ವಿದ್ಯುತ್ ನಷ್ಟವನ್ನು ಕಡಿಮೆ ಮಾಡಲು ಬಂಡವಾಳ ಯೋಜನೆಗಳನ್ನು ವಿತರಣಾ ಕಂಪನಿಗಳು ಜಾರಿಗೊಳಿಸುತ್ತಿವೆ.
3. ವಿತರಣಾ ಕಂಪನಿಗಳು ಅನುಷ್ಠಾನಗೊಳಿಸಬೇಕಾಗಿರುವ ಬಂಡವಾಳ ಯೋಜನೆಗಳಲ್ಲಿ, ಹೈವೋಲ್ಟೇಜ್ ವಿತರಣಾ ವ್ಯವಸ್ಥೆ (HVDS) ವಿಧಾನವು ಒಂದು ಪ್ರಮುಖ ಯೋಜನೆಯಾಗಿರುತ್ತದೆ. ಈ ಹೈವೋಲ್ಟೇಜ್ ವಿತರಣಾ ವ್ಯವಸ್ಥೆ ಯೋಜನೆಯಲ್ಲಿ ಎಲ್.ಟಿ. ಮಾರ್ಗದ ಉದ್ದವನ್ನು ಕಡಿಮೆಗೊಳಿಸಿ ಹೆಚ್.ಟಿ. ಮಾರ್ಗದ ಉದ್ದವನ್ನು ಹೆಚ್ಚು ಮಾಡುವುದರ ಜೊತೆಗೆ, ಪ್ರತಿ 2–3 ನೀರಾವರಿ ವಿದ್ಯುತ್ ಸ್ಥಾವರಗಳಿಗೆ ಒಂದರಂತೆ ಕಡಿಮೆ ಸಾಮರ್ಥ್ಯದ ವಿತರಣಾ ಪರಿವರ್ತಕಗಳ ಅಳವಡಿಕೆ ಮೂಲಕ, ವಿತರಣಾ ಜಾಲವನ್ನು ರಚಿಸುವ ಯೋಜನೆಯಾಗಿದೆ.
4. ಈ ಸಂಬಂಧವಾಗಿ ಕರ್ನಾಟಕ ವಿದ್ಯುತ್ ನಿಯಂತ್ರಣಾ ಆಯೋಗವು ಸಹ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಿಗೆ ನಿರ್ದೇಶನ ನೀಡಿದ್ದು, ಪ್ರತಿ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಒಂದು ಉಪವಿಭಾಗದಲ್ಲಿ HVDS ವ್ಯವಸ್ಥೆಯನ್ನು ಮಾದರಿ ಯೋಜನೆಯಾಗಿ ಅಳವಡಿಸಲು ನಿರ್ದೇಶನ ನೀಡಿದೆ. ಕೇಂದ್ರ ಸರ್ಕಾರವು ಕೂಡ ಈ ಯೋಜನೆಯನ್ನು ಅನುಷ್ಠಾನಗೊಳಿಸುವಂತೆ ರಾಜ್ಯ ಸರ್ಕಾರವನ್ನು ಕೋರಿದೆ.
5. ಈ ಯೋಜನೆಯನ್ನು ಅನುಷ್ಠಾನಗೊಳಿಸುವುದರಿಂದ ಕೆಳಕಂಡ ಅನುಕೂಲಗಳನ್ನು ವಿದ್ಯುತ್ ವಿತರಣಾ ಜಾಲದಲ್ಲಿ ಹೊಂದಬಹುದಾಗಿದೆ:
   - ಪ್ರಸರಣಾ ಮತ್ತು ವಿತರಣಾ ನಷ್ಟವನ್ನು ಕಡಿಮೆ ಮಾಡಬಹುದಾಗಿದೆ.
   - ವಿತರಣಾ ವ್ಯವಸ್ಥೆಯಲ್ಲಿ ವಿದ್ಯುತ್ ಕಳ್ಳತನದಿಂದ ಸರಬರಾಜು ಕಂಪನಿಗಳ ಆದಾಯದಲ್ಲಿ ಆಗುತ್ತಿರುವ ನಷ್ಟವನ್ನು ಕಡಿಮೆ ಮಾಡಬಹುದಾಗಿದೆ.
   - ಅಕ್ರಮ ವಿದ್ಯುತ್ ಸಂಪರ್ಕಗಳಿಂದ ವಿದ್ಯುತ್ ಜಾಲದ ಮೇಲೆ ಅತ್ಯಧಿಕ ಹೊರೆಯನ್ನು ಕಡಿಮೆ ಮಾಡಬಹುದು.
   - ಅಲ್ಲದೆ, ಸಕ್ರಮ ಗ್ರಾಹಕರಿಗೆ ಗುಣಮಟ್ಟದ ವಿದ್ಯುತನ್ನು ಒದಗಿಸಬಹುದು.
   - ವಿತರಣಾ ಪರಿವರ್ತಕಗಳ ವಿಫಲತೆಯ ಪ್ರಮಾಣವನ್ನು ಕಡಿಮೆಗೊಳಿಸಬಹುದು.

ಈ ಹಿನ್ನೆಲೆಯಲ್ಲಿ, ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 53 ಪಿಎಸ್ಆರ್ 2013, ಬೆಂಗಳೂರು, ದಿನಾಂಕ : 03–10–2013**

ಹೈವೋಲ್ಟೇಜ್ ವಿತರಣಾ ವ್ಯವಸ್ಥೆ (HVDS) ಯೋಜನೆಯನ್ನು 2013–14ನೇ ಸಾಲಿನಿಂದಲೇ ಪ್ರಾಯೋಗಿಕವಾಗಿ ತಲಾ ಒಂದು ಉಪವಿಭಾಗದಲ್ಲಿ ಮಾತ್ರ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ, ಕೆಳಕಂಡ ಷರತ್ತುಗಳೊಂದಿಗೆ ಅನುಷ್ಠಾನಗೊಳಿಸಬೇಕೆಂದು ಆದೇಶಿಸಲಾಗಿದೆ.

ಅ) ವಿದ್ಯುತ್ ಸರಬರಾಜು ಕಂಪನಿಗಳು ವಿಸ್ತೃತ ಯೋಜನಾ ವರದಿ (DPR) ತಯಾರಿಸಿ ಸರ್ಕಾರದ ಅನುಮೋದನೆ ಪಡೆಯುವುದು.

ಆ) ಹೈವೋಲ್ಟೇಜ್ ವಿತರಣಾ ವ್ಯವಸ್ಥೆಯ ಅನುಷ್ಠಾನದ ಮೇಲ್ವಿಚಾರಣೆಗಾಗಿ ಪ್ರತಿ ವಿದ್ಯುತ್ ಸರಬರಾಜು ಕಂಪನಿಯಲ್ಲಿ ಒಂದು ಪ್ರತ್ಯೇಕ ಘಟಕವನ್ನು ರಚಿಸುವುದು.

ಇ) ಈ ಯೋಜನೆಯ ಕನಿಷ್ಠ ಶೇಕಡಾ 75 ರಷ್ಟು ವೆಚ್ಚವನ್ನು ವಿದ್ಯುತ್ ಸರಬರಾಜು ಕಂಪನಿಗಳು ತನ್ನ ಬಂಡಾಳದಿಂದ ಭರಿಸುವುದು.

ಈ) ವಿದ್ಯುತ್ ಸರಬರಾಜು ಕಂಪನಿಗಳು ಅವಶ್ಯಕತೆಗೆ ಅನುಗುಣವಾಗಿ ನ್ಯಾಷನಲ್ ಎಲೆಕ್ಟ್ರಿಸಿಟಿ ಫಂಡ್ (NEF) ನಿಂದ ಹಣ ಪಡೆಯಬಹುದಾಗಿದೆ.

ಈ ಆದೇಶವನ್ನು, ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 980 EXP-1/2013, ದಿನಾಂಕ: 6–9–2013ರಲ್ಲಿ ನೀಡಿದ ಸಹಮತಿ ಮತ್ತು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ : ಪಿಡಿ 10 ಎಂಸಿಎಂ 2013, ದಿನಾಂಕ : 5–9–2013ರಲ್ಲಿ ನೀಡಿದ ಅಭಿಪ್ರಾಯದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

PR. 1119

## ಇಂಧನ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಇಎನ್ 168 ಎನ್‌ಸಿಇ 2013, ಬೆಂಗಳೂರು, ದಿನಾಂಕ : 02-07-2013.**

ಸರ್ಕಾರಿ ಆದೇಶ ಸಂಖ್ಯೆ : ಇಎನ್ 37 ಎನ್‌ಸಿಇ 2013, ದಿನಾಂಕ : 16-05-2013ರ ಕ್ರಮ ಸಂಖ್ಯೆ (2) ರ ಷರತ್ತು "ಮೆ। ಮಣಿಪಾಲ್ ಹೆಲ್ತ್ ಸಿಸ್ಟಮ್ ಪ್ರೈವೇಟ್ ಲಿಮಿಟೆಡ್ ರವರು ಉತ್ಪಾದಿಸುವ ವಿದ್ಯುತ್ತನ್ನು ಸರಬರಾಜು ಮಾಡುವ ಸಂಬಂಧ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು"

ಎಂಬುದನ್ನು ಈ ಕೆಳಗಿನಂತೆ ತಿದ್ದಿ ಓದಿಕೊಳ್ಳತಕ್ಕದ್ದು.

"ಮೂಲ ಹಂಚಿಕೆ ಆದೇಶದಲ್ಲಿ ಮಂಜೂರಾಗಿರುವ 3.75 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಬೆಸ್ಕಾಂನೊಂದಿಗಿನ ಪಿ.ಪಿ.ಎ. ಮುಂದುವರೆಯತಕ್ಕದ್ದು. ಈಗ ಹೆಚ್ಚಳಗೊಂಡ ಸಾಮರ್ಥ್ಯವಾದ 7.45 ಮೆ.ವ್ಯಾ. ಸಾಮರ್ಥ್ಯವನ್ನು ಮೆ। ಮಣಿಪಾಲ್ ಹೆಲ್ತ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ತಮ್ಮ ಸ್ವಂತಕ್ಕೆ ಬಳಸಿಕೊಳ್ಳಲು ಅನುಮತಿ ನೀಡಲಾಗಿದೆ"

ಇನ್ನುಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 1135**

**SC - 25**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ವಕೀಲರ ಕಲ್ಯಾಣ ನಿಧಿಗೆ 2013-14ನೇ ಸಾಲಿನಲ್ಲಿ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಲಾ 35 ಎಲ್‌ಎಎಂ 2013, ದಿನಾಂಕ : 18-03-2013.

2. ಅಧ್ಯಕ್ಷರು, ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಇವರ ಪತ್ರ ದಿನಾಂಕ : 04-09-2013.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ 2013-14ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2014-00-114-0-03 (ಯೋಜನೆ) ಯಡಿ ರೂ. 200 ಲಕ್ಷ ಆಯವ್ಯಯ ಅವಕಾಶವಿದ್ದು ಮುಂದುವರಿದ ಯೋಜನೆಯಡಿ ಸದರಿ ಯೋಜನೆಯನ್ನು ಮುಂದುವರಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ : 18-03-2013ರ ಆದೇಶದಲ್ಲಿ ಮಂಜೂರಾತಿ ನೀಡಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 04-09-2013ರ ಪತ್ರದಲ್ಲಿ ಅಧ್ಯಕ್ಷರು ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಇವರು ವಕೀಲರ ಕ್ಷೇಮಾಭಿವೃದ್ಧಿ ನಿಧಿಗಾಗಿ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಮೇಲ್ಕಂಡ ಯೋಜನೆಯಡಿ ಒದಗಿಸಿರುವ ಅನುದಾನದಲ್ಲಿಯೇ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಲಾ 83 ಎಲ್‌ಸಿಎಲ್ 2013, ಬೆಂಗಳೂರು, ದಿನಾಂಕ : 14-11-2013.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ವಕೀಲರ ಕಲ್ಯಾಣ ನಿಧಿಗೆ 2013-14ನೇ ಸಾಲಿನ ಪರಿಷ್ಕೃತ ಆಯವ್ಯಯ ಲೆಕ್ಕ ಶೀರ್ಷಿಕೆ 2014-00-114-0-03 (ಯೋಜನೆ) ವಕೀಲರ ಕಲ್ಯಾಣ ನಿಧಿ ಅಂಶದಾನಗಳ ಅಡಿಯಲ್ಲಿ ರೂ. 100.00 ಲಕ್ಷಗಳನ್ನು (ರೂಪಾಯಿ ನೂರು ಲಕ್ಷಗಳು ಮಾತ್ರ) ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಯಲ್ಲಿ ಸ್ಪಷ್ಟಪಡಿಸಿರುವಂತೆ ವಕೀಲರ ಪರಿಷತ್ತು, ಅಡ್ವೋಕೇಟ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರಿಗೆ ಬಿಲ್ಲನ್ನು ಸಲ್ಲಿಸಿ ಹಣ ಪಾವತಿಸಿಕೊಳ್ಳಬಹುದಾಗಿರುತ್ತದೆ.

1. ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
2. ಈ ಲೆಕ್ಕ ಶೀರ್ಷಿಕೆಯಲ್ಲಿ ಬಿಡುಗಡೆ ಮಾಡಿದ ಒಟ್ಟು ರೂ. 100 ಲಕ್ಷಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಬೆಂಗಳೂರುರವರು ಅಂಕಿ-ಅಂಶಗಳ ಸಹಿತ ಕಾಲಮಿತಿಯೊಳಗೆ ನಿಯಮಾನುಸಾರ ಅಡ್ವೋಕೇಟ್ ಜನರಲ್‌ರವರ ಮೇಲು ರುಜು ಪಡೆದು ಸರ್ಕಾರಕ್ಕೆ ಸಲ್ಲಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ವನಇ 533 ಆಂಆಬಿ 2013, ದಿನಾಂಕ : 11-10-2013 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ಲಕ್ಷ್ಮೀನರಸಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿಗಳು (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**P.R. 1220**

**SC - 15**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಸ್.ಕೆ. ಕುಮಾರ್, ಅಬಕಾರಿ ಉಪ ಆಯುಕ್ತರು, ಯಾದಗಿರಿ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 139 ಇಪಿಎಸ್ 2013, ಬೆಂಗಳೂರು, ದಿನಾಂಕ : 07ನೇ ಅಕ್ಟೋಬರ್, 2013.**

ಶ್ರೀ ಎಸ್.ಕೆ. ಕುಮಾರ್, ಅಬಕಾರಿ ಉಪ ಆಯುಕ್ತರು, ಯಾದಗಿರಿ ಜಿಲ್ಲೆ, ಯಾದಗಿರಿ ಅವರು 2013–14ನೇ ಸಾಲಿನ ಸಿಎಲ್–2, ಸಿಎಲ್–3, ಸಿಎಲ್–9 ಹಾಗೂ ಸಿಎಲ್–11 ಒಟ್ಟು 112 ಅಬಕಾರಿ ಸನ್ನದುಗಳನ್ನು ಜಿಲ್ಲಾಧಿಕಾರಿ, ಯಾದಗಿರಿ ಜಿಲ್ಲೆ ಇವರ ಹೆಸರಿನಲ್ಲಿ (Forgery and impersionation) ಸಹಿ ಮಾಡಿ, ಜಿಲ್ಲಾಧಿಕಾರಿಗಳು ಸಹಿ ಮಾಡುವ ಸ್ಥಳದಲ್ಲಿ ಜಿಲ್ಲಾಧಿಕಾರಿಯವರ ಹುದ್ದೆ ನಮೂದಿಸಿ ತಾನೇ ಸಹಿ ಮಾಡಿ ನವೀಕರಿಸಿ, ಕರ್ನಾಟಕ ಅಬಕಾರಿ (ಭಾರತೀಯ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು 1968ರ ನಿಯಮ–5(ಎ) ಅನ್ನು ಉಲ್ಲಂಘಿಸಿ ತೀವ್ರತರವಾದ ಕ್ರಿಮಿನಲ್ ದುರ್ನಡತೆ ಎಸಗಿ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ನ್ನು ಉಲ್ಲಂಘಿಸಿರುವುದರಿಂದಲೂ,

ಶ್ರೀ ಎಸ್.ಕೆ. ಕುಮಾರ್, ಅಬಕಾರಿ ಉಪ ಆಯುಕ್ತರು, ಯಾದಗಿರಿ ಜಿಲ್ಲೆ ಅವರ ಈ ಮೇಲೆ ತಿಳಿಸಿರುವ ದುರ್ನಡತೆಯು ಸರ್ಕಾರಕ್ಕೆ ತೀವ್ರವಾದ ಮುಜಗರದ ಸನ್ನಿವೇಶವನ್ನು ಉಂಟು ಮಾಡಿರುವುದರಿಂದಲೂ,

ಮೇಲಿನ ಕ್ರಿಮಿನಲ್ ದುರ್ನಡತೆಗಾಗಿ ಶ್ರೀ ಎಸ್.ಕೆ. ಕುಮಾರ್, ಅಬಕಾರಿ ಉಪ ಆಯುಕ್ತರು, ಯಾದಗಿರಿ ಜಿಲ್ಲೆ ಯಾದಗಿರಿ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ/ಇಲಾಖಾ ಶಿಸ್ತುಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಮೇಲಿನ ದುರ್ನಡತೆಗಾಗಿ ಶ್ರೀ ಎಸ್.ಕೆ. ಕುಮಾರ್, ಅಬಕಾರಿ ಉಪ ಆಯುಕ್ತರು, ಯಾದಗಿರಿ ಜಿಲ್ಲೆ, ಯಾದಗಿರಿ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ/ಇಲಾಖಾ ಶಿಸ್ತು ಕ್ರಮ ಬಾಕಿ ಇಟ್ಟು ಅವರನ್ನು ಅಮಾನತ್ತುಗೊಳಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವ.ನಿ.ಮೇ) ನಿಯಮಗಳು, 1957ರ ನಿಯಮ 10(1)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಕೆ. ಕುಮಾರ್, ಅಬಕಾರಿ ಉಪ ಆಯುಕ್ತರು, ಯಾದಗಿರಿ ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಕೆ. ಕುಮಾರ್, ಅಬಕಾರಿ ಉಪ ಆಯುಕ್ತರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಇಲ್ಲದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಕೆ. ಕುಮಾರ್, ಅಬಕಾರಿ ಉಪ ಆಯುಕ್ತರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನುಸಾರ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನಲ್ಲಿರುವ ಶ್ರೀ ಎಸ್.ಕೆ. ಕುಮಾರ್, ಅಬಕಾರಿ ಉಪ ಆಯುಕ್ತರು, ಯಾದಗಿರಿ ಈ ಹುದ್ದೆಗೆ ಹಾಗೂ ಅವರು ಹೆಚ್ಚುವರಿ ಪ್ರಭಾರದಲ್ಲಿದ್ದ ಅಬಕಾರಿ ಜಂಟಿ ಆಯುಕ್ತರು, ಗುಲ್ಬರ್ಗಾ ಈ ಹುದ್ದೆಗಳಿಗೆ ಬದಲಿ ವ್ಯವಸ್ಥೆಯನ್ನು ಮಾಡಲು ಅಬಕಾರಿ ಆಯುಕ್ತರು ಕ್ರಮ ಕೈಗೊಳ್ಳುತ್ತಾರೆ. ಅದುವರೆಗೆ ಈ ಎರಡೂ ಹುದ್ದೆಗಳನ್ನು ನಿಭಾಯಿಸಲು ಜಿಲ್ಲಾಧಿಕಾರಿ, ಯಾದಗಿರಿ ಹಾಗೂ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ ಇವರುಗಳು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿದ್ದೇಶ್ ಪೋತಲಕಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ).

P.R. 1227

## ತೋಟಗಾರಿಕೆ ಸಚಿವಾಲಯ

**ವಿಷಯ :** ಧಾರವಾಡದಲ್ಲಿ ತೋಟಗಾರಿಕೆ ಅಭಿಯಾಂತ್ರಿಕ ಮತ್ತು ಆಹಾರ ತಂತ್ರಜ್ಞಾನದ ಮಹಾ ವಿದ್ಯಾಲಯ ಸ್ಥಾಪಿಸುವ ಕುರಿತು ತಜ್ಞರ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :**
1. ಕುಲಪತಿಗಳು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರ ಪತ್ರ ಸಂ : VC/UHSB/1512/2012, ದಿನಾಂಕ : 31–12–2012.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ/ಯೋ/ಸತೋಅ–1/26/2012–13/281, ದಿನಾಂಕ : 19–03–2013.

**ಪ್ರಸ್ತಾವನೆ :**

ಮೇಲೆ ಕ್ರ.ಸಂ. 1 ರಲ್ಲಿ ಓದಲಾದ ಪತ್ರದಲ್ಲಿ ತೋಟಗಾರಿಕಾ ಉದ್ಯಮವು ಎದುರಿಸುತ್ತಿರುವ ಅತೀವ ಕಾರ್ಮಿಕರ ಕೊರತೆ ನೀಗಿಸಲು ಹಾಗೂ ಹಣ್ಣು ತರಕಾರಿಗಳ ಕೊಯ್ಲೋತ್ತರ ನಷ್ಟವನ್ನು ಸೂಕ್ತ ತಂತ್ರಜ್ಞಾನ ನಿರ್ಮಿಸುವುದು ಅತೀ ಅವಶ್ಯಕವಾಗಿದ್ದು, ಈ ಹಿನ್ನೆಲೆಯಲ್ಲಿ 2013–14 ನೇ ಶೈಕ್ಷಣಿಕ ವರ್ಷದಿಂದ ಧಾರವಾಡದಲ್ಲಿ ತೋಟಗಾರಿಕೆ ಅಭಿಯಾಂತ್ರಿಕ ಮತ್ತು ಆಹಾರ ತಂತ್ರಜ್ಞಾನದ ಮಹಾ ವಿದ್ಯಾಲಯವನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಆಡಳಿತ ನಿಯಂತ್ರಣದಲ್ಲಿ ಸ್ಥಾಪಿಸಲು ಶಿಫಾರಸ್ಸು ಮಾಡಲಾಗಿದೆ.

ಈ ಮಹಾ ವಿದ್ಯಾಲಯದ ಸ್ಥಾಪನೆಗೆ ಪ್ರಥಮವಾಗಿ ತಜ್ಞರನ್ನೊಳಗೊಂಡ ಉನ್ನತ ಮಟ್ಟದ ಸಮಿತಿಯು ಚರ್ಚಿಸಿ ಶಿಫಾರಸ್ಸು ಪಡೆಯುವುದು ಅಗತ್ಯವೆಂದು ತೀರ್ಮಾನಿಸಲಾಗಿದೆ. ಮೇಲೆ ಕ್ರ.ಸಂ. 2 ರಲ್ಲಿ ಓದಲಾದ ಪತ್ರದಲ್ಲಿ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಅಡಿ ಧಾರವಾಡದಲ್ಲಿ ತೋಟಗಾರಿಕೆ ಅಭಿಯಾಂತ್ರಿಕ ಮತ್ತು ಆಹಾರ ತಂತ್ರಜ್ಞಾನದ ಮಹಾ ವಿದ್ಯಾಲಯವನ್ನು ಸ್ಥಾಪಿಸಲು ತೋಟಗಾರಿಕೆ ಇಲಾಖೆ, ತೋಟಗಾರಿಕೆ ವಿಜ್ಞಾನಗಳ

ವಿಶ್ವವಿದ್ಯಾಲಯ, ಕೃಷಿ ವಿಶ್ವವಿದ್ಯಾಲಯ ಹಾಗೂ ಇತರೇ ಅಧಿಕಾರಿಗಳನ್ನೊಳಗೊಂಡ ತಜ್ಞರ ಸಮಿತಿಯನ್ನು ರಚಿಸಲು ತೋಟಗಾರಿಕೆ ನಿರ್ದೇಶಕರು ಪ್ರಸ್ತಾವನೆ ಕಳುಹಿಸಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 378 ತೋಇವಿ 2012, ಬೆಂಗಳೂರು, ದಿನಾಂಕ : 14-08-2013.**

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಅಡಿ ಧಾರವಾಡದಲ್ಲಿ ತೋಟಗಾರಿಕೆ ಅಭಿಯಾಂತ್ರಿಕ ಮತ್ತು ಆಹಾರ ತಂತ್ರಜ್ಞಾನದ ಮಹಾ ವಿದ್ಯಾಲಯವನ್ನು ಸ್ಥಾಪಿಸುವ ಬಗ್ಗೆ ಕುಲಪತಿಗಳು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ತಜ್ಞರ ಸಮಿತಿಯನ್ನು ರಚಿಸಲಾಗಿದೆ.

| ಕ್ರ. ಸಂ. | ಸದಸ್ಯರ ಹೆಸರು ಮತ್ತು ಪದನಾಮ | |
|---|---|---|
| 1. | ಡಾ॥ ಎಸ್.ಬಿ. ದಂಡಿನ್, ಕುಲಪತಿ, ತೋ.ವಿ.ವಿ. ಬಾಗಲಕೋಟೆ | ಅಧ್ಯಕ್ಷರು |
| 2. | ಡಾ॥ ಡಿ.ಎಲ್. ಮಹೇಶ್ವರ್, ತೋಟಗಾರಿಕೆ ನಿರ್ದೇಶಕರು ಲಾಲ್‌ಬಾಗ್, ಬೆಂಗಳೂರು | ಸದಸ್ಯರು |
| 3. | ಡಾ॥ ಕೆ. ರಾಮಕೃಷ್ಣಪ್ಪ, ತೋಟಗಾರಿಕೆ ಅಪರ ನಿರ್ದೇಶಕರು, (ಕ್ಷೇತ್ರ ಮತ್ತು ನರ್ಸರಿ) ಲಾಲ್‌ಬಾಗ್, ಬೆಂಗಳೂರು | ಸದಸ್ಯರು |
| 4. | ಡಾ॥ ರಾಜು, ಶಿಕ್ಷಣ ನಿರ್ದೇಶಕರು, ತೋ.ವಿ.ವಿ., ಬಾಗಲಕೋಟೆ | ಸದಸ್ಯರು |
| 5. | ಪ್ರೊ. ಮಹಾದೇವಯ್ಯ, ಫಾರ್ಮರ್ ಸೀನಿಯರ್ ಸೈಂಟಿಸ್ಟ್ ಅಂಡ್ ಹೆಡ್, ಡಿಪಾರ್ಟ್‌ಮೆಂಟ್ ಆಫ್ ಪಿ.ಹೆಚ್.ಟಿ., ಸಿ.ಎಫ್.ಟಿ.ಆರ್.ಐ. ಮೈಸೂರು | ಸದಸ್ಯರು |
| 6. | ಪ್ರೊ. ರಂಗಣ್ಣ, ಫಾರ್ಮರ್ ಪ್ರೊಫೆಸರ್ ಅಂಡ್ ಹೆಡ್ ಆಫ್ ಅಗ್ರಿಕಲ್ಚರಲ್ ಇಂಜಿನೀರಿಂಗ್, ಕೃ.ವಿ.ವಿ. ಬೆಂಗಳೂರು | ಸದಸ್ಯರು |
| 7. | ಡಾ॥ ಕೆ. ಅಳಗಸುಂದರಂ, ಡೈರೆಕ್ಟರ್ ಆಫ್ ಇಂಡಿಯನ್ ಇನ್ಸಿಟ್ಯೂಟ್ ಆಫ್ ಕ್ರಾಪ್ ಪ್ರೋಸೆಸಿಂಗ್ ಟೆಕ್ನಾಲಜಿ, ಎಂ.ಎಫ್.ಪಿ.ಐ., ಪುದುಕೋಟೈ, ತಮಿಳುನಾಡು | ಸದಸ್ಯರು |
| 8. | ಪ್ರೊ. ಎಸ್.ಎಸ್. ಕುಮತೆ, ಫಾರ್ಮರ್ ಡೈರೆಕ್ಟರ್ ಆಫ್ ಇನ್‌ಸ್ಟ್ರಕ್ಷನ್, ಕಾಲೇಜ್ ಆಫ್ ಅಗ್ರಿಕಲ್ಚರಲ್ ಇಂಜಿನೀರಿಂಗ್ | ಸದಸ್ಯರು |
| 9. | ಪ್ರೊ. ಎನ್.ಬಿ. ನರವಾಣಿ, ಫಾರ್ಮರ್ ಡೈರೆಕ್ಟರ್ ಆಫ್ ಇನ್‌ಸ್ಟ್ರಕ್ಷನ್, ಕಾಲೇಜ್ ಆಫ್ ಅಗ್ರಿಕಲ್ಚರಲ್ ಇಂಜಿನೀರಿಂಗ್ | ಸದಸ್ಯರು |
| 10. | ಡಾ॥ ಎಂ.ವಿ. ಮಂಜುನಾಥ್, ಪ್ರೋಫೆಸರ್ ಅಂಡ್ ಹೆಡ್ ಆಫ್ ಅಗ್ರಿಕಲ್ಚರಲ್ ಇಂಜಿನೀರಿಂಗ್, ಕೃ.ವಿ.ವಿ. ಧಾರವಾಡ | ಸದಸ್ಯರು |

ಮೇಲ್ಕಂಡ ಸಮಿತಿಯು ಧಾರವಾಡದಲ್ಲಿ ತೋಟಗಾರಿಕೆ ಅಭಿಯಾಂತ್ರಿಕ ಮತ್ತು ಆಹಾರ ತಂತ್ರಜ್ಞಾನದ ಮಹಾ ವಿದ್ಯಾಲಯವನ್ನು ಸ್ಥಾಪಿಸುವ ಬಗ್ಗೆ ವಿವರವಾಗಿ ಚರ್ಚಿಸಿ ಸೂಕ್ತ ಶಿಫಾರಸ್ಸುಗಳನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ. ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

P.R. 1230

SC - 10

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಒಇ 4 ಎಸ್‌ಸಿಎಫ್ 2013, ಬೆಂಗಳೂರು, ದಿನಾಂಕ : 11-10-2013.**

ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಟಿಡಿ 35 ಎಸ್‌ಸಿಎಫ್ 98, ದಿನಾಂಕ : 16-12-1998ರಲ್ಲಿನ ಆದೇಶ ಭಾಗದ ಕಂಡಿಕೆ 3ರಲ್ಲಿ ಲೆಕ್ಕ ಶೀರ್ಷಿಕೆ "2052-Secretariat-General Services-090-Secretariat-I-02-Expenditure connected with Committees, Conferences and Tribunals etc., (Non-Plan)" ಎಂಬುದರ ಬದಲಾಗಿ ಲೆಕ್ಕ ಶೀರ್ಷಿಕೆ "2052-Sectt General Services-090-Sectt-01-KGS-051-General Expenses" ಎಂಬುದಾಗಿ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಉಳಿದಂತೆ ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಟಿಡಿ 35 ಎಸ್‌ಸಿಎಫ್ 98, ದಿನಾಂಕ : 16-12-1998 ರಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾಫಿಪೋಸಾ ಮತ್ತು ಅಭಿಯೋಗಗಳು).

P.R. 1231

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಕಾನೂನು ಮಾಪನ ಶಾಸ್ತ್ರ ಇಲಾಖೆಗೆ ಸಹಾಯಕ ಇಂಜಿನಿಯರ್–ಕಂ–ಸಹಾಯಕ ನಿಯಂತ್ರಕರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ಪತ್ರ ಸಂಖ್ಯೆ : ಕಾಮಾಇ:ವ.ಲ್ಯಾ.ಕ: ಸಿಆರ್–05/12–13, ದಿನಾಂಕ : 18–04–2012.

**ಪ್ರಸ್ತಾವನೆ :**

ಕಾನೂನು ಮಾಪನಶಾಸ್ತ್ರ ಇಲಾಖೆಯಲ್ಲಿ ಹೊಸದಾಗಿ ನಿರ್ಮಿಸುತ್ತಿರುವ ಕಛೇರಿ ಕಟ್ಟಡಗಳ ನಿರ್ಮಾಣಗಳ ಕಾಮಗಾರಿಯನ್ನು ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ವಹಿಸುತ್ತಾ ಬಂದಿದ್ದು, ಕಟ್ಟಡಗಳ ಯೋಜನಾ ನಕ್ಷೆ/ಕಟ್ಟಡ ಕಾಮಗಾರಿಯ ಪ್ರತಿ ಹಂತಗಳ ಪರಿಶೀಲನೆಯನ್ನು ಇಲಾಖಾ ವತಿಯಿಂದ ಕೈಗೊಳ್ಳುವುದು ಅವಶ್ಯಕವಾಗಿದೆ. ಆದರೆ ಇಲಾಖೆಯ ಹಳೆಯ ಕಟ್ಟಡಗಳ ಉಸ್ತುವಾರಿ ಮಾಡುವ ಕಾರ್ಯವನ್ನು ನಿರ್ವಹಿಸಲು ಅವಶ್ಯಕವಿರುವ ಕಾರ್ಯ ನಿರ್ವಾಹಕ ಇಂಜಿನಿಯರ್ (ಸಿವಿಲ್ ಇಂಜಿನಿಯರ್ ವಿದ್ಯಾರ್ಹತೆ ಹೊಂದಿರುವ) ಹುದ್ದೆಯು ಇಲಾಖೆಯಲ್ಲಿ ಇರುವುದಿಲ್ಲ. ಕಟ್ಟಡಗಳ ನಿರ್ಮಾಣಗಳ ಕಾರ್ಯಗಳನ್ನು ಉಸ್ತುವಾರಿ ವಹಿಸಲು, ಕೇಂದ್ರ ಸರ್ಕಾರದ ಧನ ಸಹಾಯ ಹಾಗೂ ರಾಜ್ಯ ಸರ್ಕಾರದ ಹಣಕಾಸಿನ ನೆರವಿನಿಂದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಹಾಗೂ ಉಪ ವಿಭಾಗಗಳಲ್ಲಿ ವರ್ಕಿಂಗ್ ಸ್ಟಾಂಡರ್ಡ್/ಸೆಕೆಂಡರಿ ಸ್ಟ್ಯಾಂಡರ್ಡ್ ಲ್ಯಾಬೋರೇಟರಿ–ಕಂ–ಕಛೇರಿ ಕಟ್ಟಡಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಎಲ್ಲಾ ಕಟ್ಟಡ ಕಾಮಗಾರಿಗಳ ಉಸ್ತುವಾರಿ ಮತ್ತು ನಿರ್ವಹಣೆ ನೋಡಿಕೊಳ್ಳಲು ಒಬ್ಬ ಸಿವಿಲ್ ಇಂಜಿನಿಯರ್ ವಿದ್ಯಾರ್ಹತೆ ಹೊಂದಿರುವ ಸಹಾಯಕ ಇಂಜಿನಿಯರ್–ಕಂ–ಸಹಾಯಕ ನಿಯಂತ್ರಕರ ಹುದ್ದೆಯನ್ನು ಸೃಜಿಸಲು, ಸದರಿ ಹುದ್ದೆಯನ್ನು ಇಲಾಖೆಯಲ್ಲಿ ಸೇವೆಯಲ್ಲಿರುವ ಅರ್ಹ ನಿರೀಕ್ಷಕರು ಇದ್ದಲ್ಲಿ ಅವರಿಗೆ ಪದೋನ್ನತಿ ನೀಡುವ ಮೂಲಕ ಭರ್ತಿ ಮಾಡಲು, ಇಲ್ಲದಿದ್ದಲ್ಲಿ ನೇರ ನೇಮಕಾತಿಯ ಮೂಲಕ ಭರ್ತಿ ಮಾಡಲು ಅನುಮತಿಸುವಂತೆ ಮೇಲೆ ಓದಲಾದ ದಿನಾಂಕ: 18–04–2012 ರ ಪತ್ರದಲ್ಲಿ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಕಾನೂನು ಮಾಪನಶಾಸ್ತ್ರ ಇಲಾಖೆಯಲ್ಲಿ ನಿರ್ಮಿಸುತ್ತಿರುವ ಕಛೇರಿ ಕಟ್ಟಡಗಳ ಕೆಲಸಗಳ ಹಾಗೂ ಹಳೆಯ ಕಟ್ಟಡಗಳ ಉಸ್ತುವಾರಿ ಮಾಡಲು ಸಹಾಯಕ ಇಂಜಿನಿಯರ್–ಕಂ–ಸಹಾಯಕ ನಿಯಂತ್ರಕರ ಹುದ್ದೆಯನ್ನು ಸೃಜಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 28 ಕಾಮಾಸೇ 2012, ಬೆಂಗಳೂರು, ದಿನಾಂಕ : 22–08–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಾನೂನು ಮಾಪನಶಾಸ್ತ್ರ ಇಲಾಖೆಯಲ್ಲಿ ನಿರ್ಮಿಸುತ್ತಿರುವ ಕಛೇರಿ ಕಟ್ಟಡಗಳ ಕೆಲಸಗಳ ಹಾಗೂ ಹಳೆಯ ಕಟ್ಟಡಗಳ ಉಸ್ತುವಾರಿ ಮಾಡಲು ಸಿವಿಲ್ ಇಂಜಿನಿಯರ್ ವಿದ್ಯಾರ್ಹತೆ ಹೊಂದಿರುವ ಒಂದು ಸಹಾಯಕ ಇಂಜಿನಿಯರ್–ಕಂ–ಸಹಾಯಕ ನಿಯಂತ್ರಕರ ಹುದ್ದೆಯನ್ನು ರೂ. 21600–40050 (10800–20025) ಗಳ ವೇತನ ಶ್ರೇಣಿಯಲ್ಲಿ ಸೃಜಿಸಲಾಗಿದೆ. ಸಹಾಯಕ ಇಂಜಿನಿಯರ್–ಕಂ–ಸಹಾಯಕ ನಿಯಂತ್ರಕರ ಹುದ್ದೆಯನ್ನು ಇಲಾಖೆಯಲ್ಲಿ ಸೇವೆಯಲ್ಲಿರುವ ಅರ್ಹ ನಿರೀಕ್ಷಕರಿದ್ದಲ್ಲಿ ಪದೋನ್ನತಿ ಮೂಲಕ ಭರ್ತಿ ಮಾಡಲು, ಇಲ್ಲದಿದ್ದಲ್ಲಿ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 687 ವೆಚ್ಚ–5/2012, ದಿನಾಂಕ : 04–07–2012 ರಲ್ಲಿ ಸಹಮತಿಸಿರುವಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಮಹಾದೇವ**

ಪೀಠಾಧಿಕಾರಿ ಆಹಾರ–1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

P.R. 1243
SC - 50

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆಹಾರ ನಿರೀಕ್ಷಕರು ಮತ್ತು ಆಹಾರ ಶಿರಸ್ತೇದಾರರುಗಳಿಗೆ ಮೊಬೈಲ್ ಸಿಮ್ ಕಾರ್ಡ್‌ಗಳನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆರವರ ಪತ್ರ ಸಂಖ್ಯೆ : ಸಿಎಫ್ಎಸ್/ಇಎಸ್‌ಟಿ(1) 147/2011–12, ದಿನಾಂಕ : 13–01–2012.

**ಪ್ರಸ್ತಾವನೆ :**

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಹೊಸ ಪಡಿತರ ಚೀಟಿಗಳಿಗಾಗಿ ಬಂದ ಅರ್ಜಿಗಳನ್ನು ತನಿಖೆ ಮಾಡುವುದು, ಅನರ್ಹ ಪಡಿತರ ಚೀಟಿಗಳನ್ನು ಗುರುತಿಸಲು ಸ್ಥಳ ತಪಾಸಣೆ ಮಾಡುವುದು ಮತ್ತು ನ್ಯಾಯಬೆಲೆ ಅಂಗಡಿಗಳನ್ನು ತಪಾಸಣೆ ಮಾಡುವುದು ಆಹಾರ ನಿರೀಕ್ಷಕರು ಮತ್ತು ಆಹಾರ ಶಿರಸ್ತೇದಾರರುಗಳ ಜವಾಬ್ದಾರಿಯಾಗಿರುತ್ತದೆ. ಆದ ಕಾರಣ ಅವರುಗಳು ಕೆಲಸದ ದಿನಗಳಲ್ಲಿ ಕಾರ್ಯಕ್ಷೇತ್ರಗಳಲ್ಲಿ ಓಡಾಡುತ್ತಿರುತ್ತಾರೆ. ಈ ಕಾರಣದಿಂದಾಗಿ ಸಾರ್ವಜನಿಕರು ಅವರನ್ನು ಸಂಪರ್ಕಿಸುವುದು ಬಹಳ ಪ್ರಯಾಸದ ಕೆಲಸವಾಗಿರುತ್ತದೆ. ಅವರ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವಾಗ ತಹಶೀಲ್ದಾರರು, ಉಪ ನಿರ್ದೇಶಕರು ಅವರನ್ನು ಸಂಪರ್ಕಿಸುವುದು ಸಹ ಕಷ್ಟಸಾಧ್ಯವಾಗುತ್ತದೆ. ಸರ್ಕಾರದ ವತಿಯಿಂದ ಮೊಬೈಲ್ ಸಿಮ್ ಕಾರ್ಡ್‌ಗಳನ್ನು ನೀಡಿದಲ್ಲಿ, ಅವರು ಎಲ್ಲಿಯೇ ಇರಲಿ, ಸಾರ್ವಜನಿಕರು ಮತ್ತು ಮೇಲಾಧಿಕಾರಿಗಳು ಸುಲಭವಾಗಿ ಅವರುಗಳನ್ನು ಸಂಪರ್ಕಿಸಲು ಸಾಧ್ಯ. ಅದಕ್ಕಾಗಿ ರಾಜ್ಯದ ಎಲ್ಲಾ ಆಹಾರ ನಿರೀಕ್ಷಕರು ಹಾಗೂ ಆಹಾರ ಶಿರಸ್ತೇದಾರರುಗಳಿಗೆ ಪ್ರತಿಯೊಬ್ಬರಿಗೂ ಮಾಹೆಯಾನ ರೂ. 500/– ವೆಚ್ಚದಂತೆ

ಬಿ.ಎಸ್.ಎನ್.ಎಲ್. ಮೊಬೈಲ್ ಫೋನ್ ಸಿಮ್ ಕಾರ್ಡ್‌ಗಳನ್ನು ಒದಗಿಸಬಹುದಾಗಿದ್ದು, ಮೊಬೈಲ್ ಫೋನ್‌ಗಳನ್ನು ಅಧಿಕಾರಿಗಳೇ ಕೊಂಡು ಕೊಳ್ಳಬೇಕಾಗಿರುತ್ತದೆ. ಇದಕ್ಕಾಗಿ ಮಾಹೆಯಾನ ರೂ. 2,98,000/- ವೆಚ್ಚ ತಗಲುವುದಾಗಿ ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆರವರು ಕೋರಿರುತ್ತಾರೆ.

ಮೊಬೈಲ್ ಫೋನ್ ಸಿಮ್ ಕಾರ್ಡ್‌ಗಳನ್ನು ಕ್ಷೇತ್ರ ಸಿಬ್ಬಂದಿಗೆ ನೀಡುವುದರಿಂದ ಅವರ ಕಾರ್ಯದಕ್ಷತೆ ಮತ್ತು ಕಾರ್ಯಪ್ರಗತಿ ಹೆಚ್ಚಾಗುತ್ತದೆ ಎಂಬುದನ್ನು ಮನಗಂಡು ರಾಜ್ಯದ 442 ಆಹಾರ ನಿರೀಕ್ಷಕರು ಮತ್ತು 154 ಆಹಾರ ಶಿರಸ್ತೇದಾರರುಗಳಿಗೆ BSNL ಸಂಸ್ಥೆಯಿಂದ ಮೊಬೈಲ್ ಫೋನ್ ಸಿಮ್ ಕಾರ್ಡ್‌ಗಳನ್ನು ಒದಗಿಸಲು ತೀರ್ಮಾನಿಸಲಾಗಿದೆ. ಆದ್ದರಿಂದ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 48 ಆಇಸೇ 2011, ಬೆಂಗಳೂರು, ದಿನಾಂಕ : 04-09-2012.**

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ 442 ಆಹಾರ ನಿರೀಕ್ಷಕರು ಮತ್ತು 154 ಆಹಾರ ಶಿರಸ್ತೇದಾರರುಗಳಿಗೆ BSNL ಸಂಸ್ಥೆಯಿಂದ ಪ್ರತಿಯೊಬ್ಬರಿಗೆ ಮಾಹೆಯಾನ ರೂ. 500/-ಗಳ ವೆಚ್ಚದಲ್ಲಿ ಮೊಬೈಲ್ ಫೋನ್ ಸಿಮ್ ಕಾರ್ಡ್‌ಗಳನ್ನು ಒದಗಿಸಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು, 1977ರ ನಿಯಮ 17(2) ರನ್ವಯ ಸಚಿವ ಸಂಪುಟದ ಅನುಮೋದನೆಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಮಹಾದೇವ**
ಪೀಠಾಧಿಕಾರಿ ಆಹಾರ-1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**P.R. 1244**
**SC - 50**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆಹಾರ ನಿರೀಕ್ಷಕರು ಮತ್ತು ಆಹಾರ ಶಿರಸ್ತೇದಾರರುಗಳಿಗೆ ನಿಗದಿತ ಪ್ರವಾಸ ಭತ್ಯೆಯನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆರವರ ಪತ್ರ ಸಂಖ್ಯೆ : ಸಿಎಫ್ಎಸ್/ಇಎಸ್‌ಟಿ(1) 184/2011-12, ದಿನಾಂಕ : 16-03-2012.

**ಪ್ರಸ್ತಾವನೆ :**

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಪ್ರಸ್ತುತ ಒಟ್ಟು 442 ಆಹಾರ ನಿರೀಕ್ಷಕರು ಮತ್ತು 154 ಆಹಾರ ಶಿರಸ್ತೇದಾರರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಹೊಸದಾಗಿ ಪಡಿತರ ಚೀಟಿಗಳಿಗಾಗಿ ಸಲ್ಲಿಸಿದ ಅರ್ಜಿಗಳ ಬಗ್ಗೆ ತನಿಖೆ ಮಾಡುವುದು, ಅಸ್ತಿತ್ವದಲ್ಲಿರುವ ಪಡಿತರ ಚೀಟಿಗಳ ಕಾನೂನು ಬದ್ಧತೆಯನ್ನು ತನಿಖೆ ಮಾಡುವುದು ಮತ್ತು ನ್ಯಾಯ ಬೆಲೆ ಅಂಗಡಿಗಳನ್ನು ತಪಾಸಣೆ ಮಾಡುವುದು ಆಹಾರ ನಿರೀಕ್ಷಕರು ಮತ್ತು ಆಹಾರ ಶಿರಸ್ತೇದಾರರುಗಳ ಜವಾಬ್ದಾರಿಗಳ ಅಂಗವಾಗಿರುತ್ತದೆ. ಅವರ ಕರ್ತವ್ಯವನ್ನು ನಿಭಾಯಿಸಲು, ಅವರು ಸಂಬಂಧಿಸಿದ ತಾಲ್ಲೂಕು ಪ್ರದೇಶದಲ್ಲಿ ಓಡಾಡಬೇಕಾಗುತ್ತದೆ. ಪ್ರಸ್ತುತ, ಆಹಾರ ನಿರೀಕ್ಷಕರು ಮತ್ತು ಆಹಾರ ಶಿರಸ್ತೇದಾರರುಗಳಿಗೆ ಅವರು ಸಲ್ಲಿಸುವ ಮಾಸಿಕ ಪ್ರವಾಸ ಭತ್ಯೆ ಬಿಲ್ ಆಧಾರದ ಮೇಲೆ ಟಿ.ಎ./ಡಿ.ಎ. ನೀಡಲಾಗುತ್ತಿದೆ. ಈ ಬಾಬ್ತು ವಾರ್ಷಿಕವಾಗಿ ಸರ್ಕಾರಕ್ಕೆ ಸುಮಾರು ರೂ. 35,76,000/- ಆರ್ಥಿಕ ವೆಚ್ಚ ಉಂಟಾಗುತ್ತಿದೆ. ಪ್ರವಾಸ ಭತ್ಯೆ ಬಿಲ್‌ಗಳನ್ನು ಸಿದ್ಧಪಡಿಸಲು ಆಹಾರ ನಿರೀಕ್ಷಕರು ಮತ್ತು ಆಹಾರ ಶಿರಸ್ತೇದಾರರುಗಳಿಗೆ ಸಮಯಾವಕಾಶ ಇಲ್ಲದೆ ಇರುವುದರಿಂದಲೂ ಮತ್ತು ಬಿಲ್ ಸಲ್ಲಿಸಿದರೂ ತಾಲ್ಲೂಕು ಕಛೇರಿಗಳಲ್ಲಿ ಬಿಲ್‌ಗಳನ್ನು ಸಮಯಕ್ಕೆ ಸರಿಯಾಗಿ ಪರಿಶೀಲನೆ ಮಾಡಿ ಮಂಜೂರು ಮಾಡದಿರುವುದರಿಂದಲೂ, ಅವರುಗಳಿಗೆ ಪ್ರವಾಸ ಭತ್ಯೆಯು ಸಮಂಜಸವಾಗಿ ಮತ್ತು ತ್ವರಿತವಾಗಿ ಸಂದಾಯವಾಗುತ್ತಿಲ್ಲ. ಆದ್ದರಿಂದ ಬಿಲ್ ಸಲ್ಲಿಸಿ ಪ್ರವಾಸ ಭತ್ಯೆ ಪಡೆಯುವ ಬದಲು ಪ್ರತಿಯೊಬ್ಬರಿಗೆ ಪ್ರತಿ ತಿಂಗಳಿಗೆ ರೂ. 500/-ರಂತೆ ನಿಗದಿತ ಪ್ರವಾಸ ಭತ್ಯೆಯನ್ನು ನೀಡುವಂತೆ ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ 442 ಆಹಾರ ನಿರೀಕ್ಷಕರು ಮತ್ತು 154 ಆಹಾರ ಶಿರಸ್ತೇದಾರರುಗಳಿಗೆ ಪ್ರತಿ ತಿಂಗಳು ರೂ. 500/-ಗಳ ನಿಗದಿತ ಪ್ರವಾಸ ಭತ್ಯೆಯನ್ನು ನೀಡಲು ತೀರ್ಮಾನಿಸಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 48 ಆಇಸೇ 2012, ಬೆಂಗಳೂರು, ದಿನಾಂಕ : 04-09-2012.**

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ 442 ಆಹಾರ ನಿರೀಕ್ಷಕರು ಮತ್ತು 154 ಆಹಾರ ಶಿರಸ್ತೇದಾರರುಗಳಿಗೆ ಪ್ರತಿಯೊಬ್ಬರಿಗೆ ಪ್ರತಿ ತಿಂಗಳು ರೂ. 500/-ಗಳ ನಿಗಧಿತ ಪ್ರವಾಸ ಭತ್ಯೆಯನ್ನು ನೀಡಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ನಿಯಮಗಳು, 1977ರ ನಿಯಮ 17(2)ರನ್ವಯ ಸಚಿವ ಸಂಪುಟದ ಅನುಮೋದನೆಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಮಹಾದೇವ**
ಪೀಠಾಧಿಕಾರಿ ಆಹಾರ-1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**P.R. 1245**
**SC - 50**

## ಕಾರ್ಮಿಕ ಸಚಿವಾಲಯ

**ವಿಷಯ :** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯಲ್ಲಿ 06 ಪತ್ರಾಂಕಿತ ವ್ಯವಸ್ಥಾಪಕ ಹುದ್ದೆಗಳನ್ನು ಸ್ಥಳ ನಿಯುಕ್ತಿಗೊಳಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಕಾಇ 49 ಕಾಬಾಸೇ 2011, ಬೆಂಗಳೂರು, ದಿನಾಂಕ : 10–09–2013.

2. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಇಎಸ್‌ಟಿ–1/ಇತರೆ/ಸಿಆರ್–123/2010–11, ದಿನಾಂಕ : 12–11–2013.

**ಪ್ರಸ್ತಾವನೆ :**

1. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ.

| ಕ್ರ. ಸಂ. | ಹುದ್ದೆಗಳ ವಿವರ | ವೇತನ ಶ್ರೇಣಿ | ಮಂಜೂರಾತಿ ನೀಡಿರುವ ಹುದ್ದೆಗಳ ಸಂಖ್ಯೆ |
|---|---|---|---|
| 1 | ಪತ್ರಾಂಕಿತ ವ್ಯವಸ್ಥಾಪಕರು | ರೂ. 21600–40050 | 06 |
| 2 | ಪ್ರಥಮ ದರ್ಜೆ ಸಹಾಯಕರು | ರೂ. 14550–26700 | 07 |
| 3. | ದ್ವಿತೀಯ ದರ್ಜೆ ಸಹಾಯಕರು | ರೂ. 11600–21000 | 05 |
| | | **ಒಟ್ಟು** | **18** |

ಅಲ್ಲದೆ, 10 ಗ್ರೂಪ್ 'ಡಿ' ಹುದ್ದೆಗಳ ಸೇವೆಯನ್ನು ಹೊರ ಗುತ್ತಿಗೆ ಆಧಾರದ ಮೇಲೆ ಪಡೆಯಲು ಸಹ ಮಂಜೂರಾತಿ ನೀಡಿದೆ.

2. ಹೊಸದಾಗಿ ಸೃಜಿಸಲಾಗಿರುವ ಒಟ್ಟು 18 ಹುದ್ದೆಗಳ ಪೈಕಿ ಪದೋನ್ನತಿಯಿಂದ ಭರ್ತಿಮಾಡಬೇಕಾದ 6 ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಗಳನ್ನು ಹಾಲಿ ಅಸ್ಥಿತದಲ್ಲಿರುವ ಈ ಕೆಳಕಂಡ 6 ಕಾರ್ಖಾನೆಗಳ ಉಪ ನಿರ್ದೇಶಕರುಗಳ ಕಛೇರಿಗಳಿಗೆ ನೇಮಿಸಿ ಸ್ಥಳನಿಯುಕ್ತಿಗೊಳಿಸಿ ಆದೇಶಿಸುವಂತೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ಇವರು ಕೋರಿರುತ್ತಾರೆ.

| ಕ್ರ. ಸಂ. | ಕಛೇರಿಯ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ವಿಭಾಗ–1, ಬೆಂಗಳೂರು | 01 |
| 2 | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ವಿಭಾಗ–2, ಬೆಂಗಳೂರು | 01 |
| 3 | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ವಿಭಾಗ–3, ಬೆಂಗಳೂರು | 01 |
| 4 | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ವಿಭಾಗ–4, ಬೆಂಗಳೂರು | 01 |
| 5. | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ಮೈಸೂರು, ವಿಭಾಗ–1. ಮೈಸೂರು | 01 |
| 6. | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ಮಂಗಳೂರು, ವಿಭಾಗ–1, ಮಂಗಳೂರು | 01 |
| | **ಒಟ್ಟು** | **06** |

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 49 ಕಾಬಾಸೇ 2011, ಬೆಂಗಳೂರು, ದಿನಾಂಕ : 23–11–2013.**

ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಕಛೇರಿಗಳಿಗೆ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಗಳನ್ನು ಸ್ಥಳನಿಯುಕ್ತಿಗೊಳಿಸಿ ಕಾರ್ಯಾರಂಭ ಮಾಡಲು ಆದೇಶಿಸಿದೆ.

| ಕ್ರ. ಸಂ. | ಕಛೇರಿಯ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ವಿಭಾಗ–1, ಬೆಂಗಳೂರು | 01 |
| 2 | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ವಿಭಾಗ–2, ಬೆಂಗಳೂರು | 01 |
| 3 | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ವಿಭಾಗ–3, ಬೆಂಗಳೂರು | 01 |
| 4 | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ವಿಭಾಗ–4, ಬೆಂಗಳೂರು | 01 |
| 5. | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ಮೈಸೂರು, ವಿಭಾಗ–1. ಮೈಸೂರು | 01 |
| 6. | ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ ಮಂಗಳೂರು, ವಿಭಾಗ–1, ಮಂಗಳೂರು | 01 |
| | **ಒಟ್ಟು** | **06** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬೋರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ (ಕಾರ್ಖಾನೆಗಳು ಮತ್ತು ಬಾಯ್ಲರುಗಳು).

P.R. 1247

SC - 125

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59.